# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ಸದಸ್ಯರ ಹೆಸರು : ಶ್ರೀ ಕೆ.ಟಿ.ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)

ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ : 1364(1614)

ಉತ್ತರಿಸಬೇಕಾದ ಸಚಿವರು : ಕೃಷಿ ಸಚಿವರು

ಉತ್ತರಿಸಬೇಕಾದ ದಿನಾಂಕ : 11.03.2022

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೃಷಿ ಇಲಾಖೆಯಲ್ಲಿ ಮಂಜೂರಾದ ಹುದ್ದೆಗಳೆಷ್ಟು; ಇದರಲ್ಲಿ ಖಾಲಿ ಇರುವ ಹುದ್ದೆಗಳೆಷ್ಟು; (ವಿವರ ನೀಡುವುದು) | ಕೃಷಿ ಇಲಾಖೆಯಲ್ಲಿ ಒಟ್ಟು 9017 ಮಂಜೂರಾದ ಹುದ್ದೆಗಳಿದ್ದು, ಅದರಲ್ಲಿ 4028 ಹುದ್ದೆಗಳು ಭರ್ತಿಯಾಗಿದ್ದು, 4989 ಹುದ್ದೆಗಳು ಖಾಲಿ ಇರುತ್ತದೆ.(ವಿವರವನ್ನು ಅನುಬಂಧದಲ್ಲಿ ತಯಾರಿಸಿ ಲಗತ್ತಿಸಿದೆ.) |
| ಆ) | ಸಿಬ್ಬಂದಿಗಳ ಕೊರತೆಯಿಂದ ರೈತರ ಕೆಲಸಗಳು ಕುಂಠಿತವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. ಸಿಬ್ಬಂದಿಗಳ ಕೊರತೆ ಇರುವುದು ಗಮನದಲ್ಲಿದೆ. ಆದಾಗ್ಯೂ, ರೈತರಿಗೆ ಇಲಾಖಾ ಸವಲತ್ತುಗಳನ್ನು ವಿತರಣೆ ಮಾಡುವಲ್ಲಿ ಹಾಗೂ ನೌಕರರ ಕೊರತೆ ನೀಗಿಸಲು ಎಲ್ಲಾ ರೈತ ಸಂಪರ್ಕ ಕೇಂದ್ರಗಳಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ದಾಸ್ತಾನು ನಿರ್ವಹಣಾ ಸಿಬ್ಬಂದಿಗಳನ್ನು ಪಡೆದು ಸದಾಕಾಲ ಕಚೇರಿಯಲ್ಲಿ ಕಾರ್ಯನಿರ್ವಹಿಸುವಂತೆ ಕ್ರಮವಹಿಸಲಾಗಿದೆ. ರೈತರಿಗೆ ಮಾರ್ಗದರ್ಶನ ನೀಡಲು ATMA (Agriculture Technology Management Agency) ಯೋಜನೆಯಡಿ ಹೊರಗುತ್ತಿಗೆ ಆಧಾರದಲ್ಲಿ ತಾಂತ್ರಿಕ ಮಾರ್ಗದರ್ಶನ ನೀಡುವ ಕಾರ್ಯದಲ್ಲಿ ತೊಡಗಿಸಿಕೊಳ್ಳಲು ATMಗಳನ್ನು (ಸಹಾಯಕ ತಾಂತ್ರಿಕ ವ್ಯವಸ್ಥಾಪಕರು) ಹೋಬಳಿ ಮಟ್ಟದಲ್ಲಿ, ತಾಲ್ಲೂಕು ಮಟ್ಟದಲ್ಲಿ BTM (ಬ್ಲಾಕ್ ತಾಂತ್ರಿಕ ವ್ಯವಸ್ಥಾಪಕರು) ಹಾಗೂ ಜಿಲ್ಲಾ ಮಟ್ಟದಲ್ಲಿ DPDಗಳನ್ನು (ಉಪ ಯೋಜನಾ ನಿರ್ದೇಶಕರು) ತೆಗೆದುಕೊಂಡು ಕಚೇರಿ ಕೆಲಸ ವಿಳಂಬವಾಗದಂತೆ ಕ್ರಮವಹಿಸಲಾಗಿದೆ. |

| | | |
|---|---|---|
| ಇ) | ಬಂದಿದ್ದಲ್ಲಿ. ಖಾಲಿ ಹುದ್ದೆಗಳನ್ನು ಶೀಘ್ರವಾಗಿ ಭರ್ತಿ ಮಾಡಲು ಕೈಗೊಂಡ ಕ್ರಮಗಳೇನು? | ಕೃಷಿ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳನ್ನು ನೇರ ನೇಮಕಾತಿ ಹಾಗೂ ಮುಂಬಡ್ತಿ ಮೂಲಕ ಭರ್ತಿ ಮಾಡಲು ಕ್ರಮ ಕೈಗೊಳ್ಳಲಾಗಿದೆ "ಬಿ" ವೃಂದದ ಸಹಾಯಕ ಕೃಷಿ ಅಧಿಕಾರಿ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅನುಮತಿ ಕೋರಿ ಸರ್ಕಾರಕ್ಕೆ ದಿನಾಂಕ: 06.11.2021ರಂದು ಪ್ರಸ್ತಾವನೆ ಸಲ್ಲಿಸಿದೆ. ಗ್ರೂಪ್ "ಸಿ" ವೃಂದದ ಹುದ್ದೆಗಳಾದ ಪ್ರಥಮ ದರ್ಜೆ ಸಹಾಯಕರ 50, ದ್ವಿತೀಯ ದರ್ಜೆ ಸಹಾಯಕರ 07 ಹುದ್ದೆಗಳನ್ನು ಭರ್ತಿ ಮಾಡಲು 21.12.2019ರಲ್ಲಿ ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದ್ದು, ಪ್ರಸ್ತುತ ರಾಜ್ಯದಲ್ಲಿರುವ ಕೋವಿಡ್-19 ರಿಂದ ಉಂಟಾದ ಆರ್ಥಿಕ ಪರಿಸ್ಥಿತಿಯಿಂದ ಮುಂದಿನ ಆದೇಶದವರೆಗೆ ಎಲ್ಲ ನೇರ ನೇಮಕಾತಿಗಳನ್ನು ತಡೆಹಿಡಿಯಲಾಗಿರುತ್ತದೆ. |

ಇ-ಸಂಖ್ಯೆ: AGRI-19/ANE/2022

(ಬಿ.ಸಿ. ಪಾಟೀಲ್)
ಕೃಷಿ ಸಚಿವರು